ಸದನದಲ್ಲಿ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಬುಧವಾರ, ದಿನಾಂಕ: 09ನೇ ಡಿಸೆಂಬರ್, 2020

ವಿಶ್ವವಿದ್ಯಾಲಯಗಳ ಬೋರ್ಡ್ ಆಫ್ ಮ್ಯಾನೇಜ್‌ಮೆಂಟ್‌ನಲ್ಲಿ ಶಾಸಕರುಗಳನ್ನು ನಾಮ ನಿರ್ದೇಶನ ಮಾಡುವ ಕುರಿತು

ಶ್ರೀ ಹೆಚ್.ಎಂ. ರಮೇಶ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು) -

32 (275) ಮುಜರಾಯಿ ಹಾಗೂ ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) 2005ರಲ್ಲಿ ಕರ್ನಾಟಕ ಪಶು ವೈದ್ಯಕೀಯ, ಪಶು ಹಾಗೂ ಮೀನುಗಾರಿಕಾ ವಿಜ್ಞಾನಗಳ ವಿಶ್ವವಿದ್ಯಾನಿಲಯ ಪ್ರಾರಂಭವಾಗಿದ್ದರೂ ಸಹ ಬೋರ್ಡ್ ಆಫ್ ಮ್ಯಾನೇಜಮೆಂಟ್‌ನಲ್ಲಿ ಮಾನ್ಯ ಶಾಸಕರುಗಳನ್ನು ನಾಮ ನಿರ್ದೇಶನ ಮಾಡಲು ಅವಕಾಶ ಕಲ್ಪಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಬಂದಿದ್ದಲ್ಲಿ, ಮಾನ್ಯ ಶಾಸಕರುಗಳನ್ನು ನಾಮ ನಿರ್ದೇಶನ ಮಾಡಲು ಸರ್ಕಾರದ ನಿಲುವೇನು ;

(ಇ) ಮಂಗಳೂರು ಮೀನುಗಾರಿಕಾ ಮಹಾವಿಶ್ವವಿದ್ಯಾಲಯದಲ್ಲಿ AICRP ಯೋಜನೆಯ ಅನುಷ್ಠಾನದಲ್ಲಿ ಆಗಿರುವ ಲೋಪದೋಷಗಳು ಸರ್ಕಾರದ ಗಮನಕ್ಕೆ ಬಂದಿವೆಯೇ ;

(ಈ) ಲೋಕಸಭಾ ಚುನಾವಣೆಯ ಮಾದರಿಯ ನೀತಿ ಸಂಹಿತೆ ಇದ್ದಾಗಲೂ ಸಹ ಪತ್ರಿಕಾ ಪ್ರಕಟಣೆ ನೀಡದೆ 2019ರ AICRP ಯೋಜನೆಯಡಿಯಲ್ಲಿ ನಿಯಮಬಾಹಿರವಾಗಿ ವಿಜ್ಞಾನಿ ಹಾಗೂ ತಾಂತ್ರಿಕ ಸಿಬ್ಬಂದಿಗಳನ್ನು ನೇಮಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;